## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 126 ಡಿಬಿಎಂ, 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್, 2005**

**ವಿಷಯಃ** ವಿಧಾನಸೌಧದ ದಕ್ಷಿಣದಲ್ಲಿರುವ ಹೊಸ ವಿಕಾಸಸೌಧ ಕಟ್ಟಡದ ಆಂತರಿಕ ಭದ್ರತೆ, ನೈರ್ಮಲ್ಯತೆ ಹಾಗೂ ಲಿಫ್ಟ್ ಚಾಲನೆ ಕೆಲಸಗಳಿಗೆ ಟೆಂಡರ್ ಕರೆಯುವ ಬಗ್ಗೆ

ವಿಧಾನಸೌಧದ ದಕ್ಷಿಣದಲ್ಲಿ ನಿರ್ಮಿಸಿರುವ ಹೊಸ ವಿಕಾಸಸೌಧ ಕಟ್ಟಡದ ಆಂತರಿಕ ಭದ್ರತೆ, ಸ್ವಚ್ಛತೆ, ನೈರ್ಮಲ್ಯತೆ ಮತ್ತು ಲಿಫ್ಟ್‌ಗಳ ಚಾಲನೆಯನ್ನು ನಿರ್ವಹಿಸಲು ಆ ಕ್ಷೇತ್ರಗಳಲ್ಲಿ ಪರಿಣತಿ ಇರುವ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರ್‌ನ್ನು ಈ ಮೂಲಕ ಕರೆಯಲಾಗಿದೆ. ವಿಕಾಸಸೌಧದಲ್ಲಿನ ಮಹಡಿಗಳು, ಕಾರಿಡಾರ್, ಪೋರ್ಟಿಕೋ, ಸ್ಟೇರ್‌ಕೇಸ್ ಹಾಗೂ ಸಾಮಾನ್ಯ ಉಪಯೋಗದ ಸ್ಥಳಾವಕಾಶ, ಕೊಠಡಿಗಳ ವಿವರ ಮತ್ತು ಒಟ್ಟು ವಿಸ್ತೀರ್ಣ, ಶೌಚಾಲಯಗಳ ವಿವರ ಹಾಗೂ ಲಿಫ್ಟ್‌ಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

1) ಮೊಹರು ಮಾಡಿರುವ ಟೆಂಡರ್ ಕವರಿನ ಮೇಲೆ ''ಹೊಸ ವಿಕಾಸಸೌಧ ಕಟ್ಟಡದ ಭದ್ರತೆ / ಸ್ವಚ್ಛತೆ / ನೈರ್ಮಲ್ಯತೆ / ಲಿಫ್ಟ್ ಚಾಲನೆ ಬಗ್ಗೆ ಗುತ್ತಿಗೆ'' ಎಂದು ಬರೆದಿರತಕ್ಕದ್ದು.
2) ಟೆಂಡರ್ ನಮೂನೆಯನ್ನು ರೂ.563-00ಕ್ಕೆ (ನಮೂನೆ ದರ ರೂ.500 + ಮೌಲ್ಯವರ್ಧಿತ ತೆರಿಗೆ ರೂ. 63) ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಪಡೆದು, ಅದನ್ನು ದಿನಾಂಕಃ 6-12-2005ರ ಮಧ್ಯಾಹ್ನ 4-30 ರೊಳಗಾಗಿ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆಃ 23, ನೆಲಮಹಡಿ, ವಿಧಾನಸೌಧ, ಬೆಂಗಳೂರು, ಇವರಿಂದ, ಪಡೆದುಕೊಳ್ಳಬಹುದು.
3) ಭದ್ರತೆ, ಸ್ವಚ್ಛತೆ ಮತ್ತು ಲಿಫ್ಟ್ ಚಾಲನೆ ಮುಂತಾದ ಎಲ್ಲಾ ಅಂಶಗಳಿಗೂ ಸಂಬಂಧಿಸಿದ ಗುತ್ತಿಗೆಯನ್ನು ನಿರ್ವಹಿಸಲು ಸಿದ್ಧವಿರುವ ವ್ಯಕ್ತಿ / ಸಂಸ್ಥೆಗಳು ಟೆಂಡರ್‌ನೊಂದಿಗೆ ರೂ. 4-00 ಲಕ್ಷ ಇ.ಎಂ.ಡಿ. ಮೊತ್ತಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಪಡೆದು, ಅದನ್ನು ಟೆಂಡರ್‌ನೊಂದಿಗೆ ಲಗತ್ತಿಸಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆಃ 23, ವಿಧಾನಸೌಧ, ಬೆಂಗಳೂರು, ಇವರಿಗೆ ಸಂಬೋಧಿಸಿ ಕಳುಹಿಸತಕ್ಕದ್ದು.
4) ಭದ್ರತಾ ವ್ಯವಸ್ಥೆಯನ್ನು ಮಾತ್ರ ನಿರ್ವಹಿಸಲು ಇಚ್ಛಿಸುವ ವ್ಯಕ್ತಿ / ಸಂಸ್ಥೆಯು ರೂ.1.50 ಲಕ್ಷ ಇ.ಎಂ.ಡಿ.; ಸ್ವಚ್ಛತಾ ವ್ಯವಸ್ಥೆಯನ್ನು ಮಾತ್ರ ನಿರ್ವಹಿಸಲು ಇಚ್ಛಿಸುವ ವ್ಯಕ್ತಿ / ಸಂಸ್ಥೆಯು ರೂ.1.50 ಲಕ್ಷ ಇ.ಎಂ.ಡಿ.; ಲಿಫ್ಟ್ ಚಾಲನೆ ವ್ಯವಸ್ಥೆಯನ್ನು ಮಾತ್ರ ನಿರ್ವಹಿಸಲು ಇಚ್ಛಿಸುವ ವ್ಯಕ್ತಿ / ಸಂಸ್ಥೆಯು ರೂ.1.00 ಲಕ್ಷ ಇ.ಎಂ.ಡಿ.ಗೆ ಬ್ಯಾಂಕ್ ಡ್ರಾಫ್ಟ್‌ನ್ನು ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಪಡೆದು ಸಲ್ಲಿಸತಕ್ಕದ್ದು.
5) ಗೊತ್ತುಪಡಿಸಿದ ಅರ್ಜಿ ನಮೂನೆಯಲ್ಲಿ, ನಿಗದಿತ ದಿನಾಂಕ ಮತ್ತು ಸಮಯದೊಳಗೆ ಇ.ಎಂ.ಡಿ. ಮೊತ್ತಕ್ಕೆ ಬ್ಯಾಂಕ್ ಡ್ರಾಫ್ಟ್ ಹಾಗೂ ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳಲ್ಲಿ ತಿಳಿಸಿರುವ ಎಲ್ಲಾ ದಾಖಲೆಗಳೊಂದಿಗೆ ಟೆಂಡರ್‌ಗಳನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕಃ 07-12-2005ರ ಮಧ್ಯಾಹ್ನ 3-00 ಗಂಟೆಯವರೆಗೆ
7) ಟೆಂಡರ್‌ನ್ನು ದಿನಾಂಕಃ 9-12-2005 ರ ಮಧ್ಯಾಹ್ನ 3-00 ಗಂಟೆಗೆ ಪ್ರಧಾನ ಕಾರ್ಯದರ್ಶಿ, ಸಿಆಸುಇ, ಕೊಠಡಿ ಸಂಖ್ಯೆಃ 246, 2ನೇ ಮಹಡಿ, ವಿಧಾನಸೌಧ, ಇವರ ಕಚೇರಿಯಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
8) ಗುತ್ತಿಗೆ ಅವಧಿಯು ದಿನಾಂಕಃ 1-1-2006 ರಿಂದ 31-12-2006 ರವರೆಗೆ ಅಂದರೆ ಮೊದಲ ಹಂತದಲ್ಲಿ ಒಂದು ವರ್ಷದ ಅವಧಿಗೆ ಮಾತ್ರ ಜಾರಿಯಲ್ಲಿರುವುದು. ಈ ಅವಧಿಯಲ್ಲಿ ಗುತ್ತಿಗೆದಾರರ ಸೇವೆಯು ತೃಪ್ತಿಕರವಾಗಿದ್ದಲ್ಲಿ, ಇನ್ನೂ ಎರಡು ವರ್ಷಗಳಿಗೆ ಸರ್ಕಾರ ಮತ್ತು ಗುತ್ತಿಗೆದಾರರು ಒಪ್ಪಿಕೊಳ್ಳಬಹುದಾದ ನಿಬಂಧನೆಗಳಿಗೆ ಒಳಪಟ್ಟು ಗುತ್ತಿಗೆಯನ್ನು ಮುಂದುವರಿಸಲಾಗುವುದು. ಗುತ್ತಿಗೆದಾರರು ಒಂದು ವರ್ಷದ ಪೂರ್ಣ ಅವಧಿಗೆ ಗುತ್ತಿಗೆ ದರವನ್ನು ನಮೂದಿಸತಕ್ಕದ್ದು. ನಮೂದಿಸುವ ದರವು ತೆರಿಗೆ ಇತ್ಯಾದಿಗಳನ್ನು ಒಳಗೊಂಡಿದೆಯೇ ಎಂಬುದನ್ನು ಸ್ಪಷ್ಟಪಡಿಸಬೇಕು. ಒಳಗೊಂಡಿದ್ದಲ್ಲಿ, ಅದರ ವಿವರ ನೀಡುವುದು.
9) ಯಶಸ್ವಿ ಟೆಂಡರ್‌ದಾರರು ಪಾವತಿ ಮಾಡುವ ಇ.ಎಂ.ಡಿ ಮೊತ್ತವನ್ನು ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ನಿಭಾಯಿಸುವ ಸಲುವಾಗಿ ಬಡ್ಡಿ ರಹಿತ ಭದ್ರತಾ ಠೇವಣಿಯಾಗಿ ಪರಿಗಣಿಸಲಾಗುವುದು. ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವ ಇ.ಎಂ.ಡಿ ಮೊತ್ತವನ್ನು ಗುತ್ತಿಗೆ ಅವಧಿ ಮುಗಿದ ನಂತರ ಗುತ್ತಿಗೆದಾರರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇಲ್ಲದಿದ್ದಲ್ಲಿ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.
10) ಅಯಶಸ್ವಿ ಟೆಂಡರ್‌ದಾರರ ಮುಂಗಡ ಹಣವನ್ನು ಟೆಂಡರ್ ಪ್ರಕ್ರಿಯೆ ಮುಗಿದ ನಂತರ ಹಿಂದಿರುಗಿಸಲಾಗುವುದು.
11) ಈ ಗುತ್ತಿಗೆಯು ಈ ಕೆಳಗಿನ ನಿಬಂಧನೆಗಳಿಗೆ ಒಳಪಟ್ಟಿದೆಃ

**ಸಾಮಾನ್ಯ ನಿಬಂಧನೆಗಳು (ಎಲ್ಲಾ ಸೇವೆಗಳಿಗೆ ಅನ್ವಯವಾಗುವ)**

1) ಬೆಂಗಳೂರು ನಗರದ ವ್ಯಾಪ್ತಿಯಲ್ಲಿ ಇರುವ ವ್ಯಕ್ತಿಗಳು ಅಥವಾ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
2) ಈ ಕ್ಷೇತ್ರದಲ್ಲಿ ಕನಿಷ್ಠ 3 ವರ್ಷಗಳ ಅನುಭವ ಇರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು
3) ಗುತ್ತಿಗೆಯಲ್ಲಿ ಭಾಗವಹಿಸುವ ಸಂಸ್ಥೆಯು, ಈ ಕ್ಷೇತ್ರದಲ್ಲಿ ತಮಗಿರುವ ಅನುಭವ, ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆ/ ಇಲಾಖೆ/ ಕಚೇರಿಗಳ ವಿವರಗಳನ್ನು ದಾಖಲೆಗಳೊಂದಿಗೆ ಒದಗಿಸುವುದು.

4) ಈ ಗುತ್ತಿಗೆಯಲ್ಲಿ ಭಾಗವಹಿಸುವ ಸಂಸ್ಥೆಗಳು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದು, ಸಂಸ್ಥೆಯ ಸಿಬ್ಬಂದಿಗೆ ಸೂಕ್ತ ಸಮಯದಲ್ಲಿ ವೇತನವನ್ನು ನೀಡುವ ಶಕ್ತಿಯನ್ನು ಹೊಂದಿದ್ದಲ್ಲಿ ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು. ಈ ಬಗ್ಗೆ ಅಗತ್ಯ ದಾಖಲೆಗಳನ್ನು ಒದಗಿಸತಕ್ಕದ್ದು.
5) ಟೆಂಡರ್‌ದಾರರು ಅವರು ಸಲ್ಲಿಸುವ ಟೆಂಡರ್‌ನಲ್ಲಿ ಅವರ ಪೂರ್ಣ ಹೆಸರನ್ನು ನಮೂದಿಸಿ ಸಹಿ ಹಾಕಿರತಕ್ಕದ್ದು. ಅದು ಒಂದು ಸಂಸ್ಥೆಯ ಪರವಾಗಿ ಇದ್ದಲ್ಲಿ, ಆ ಸಂಸ್ಥೆಯ ಮಾಲೀಕ ಅಥವಾ ಅವರಿಂದ ನಾಮನಿರ್ದೇಶನ ಮಾಡಲ್ಪಟ್ಟ ವ್ಯಕ್ತಿಯ ಹೆಸರಿನೊಂದಿಗೆ ಸಹಿ ಹಾಕಿರತಕ್ಕದ್ದು.
6) ಪ್ರತಿಯೊಬ್ಬ ಟೆಂಡರ್‌ದಾರನು ತನ್ನ ವಾಸಸ್ಥಳ ಹಾಗೂ ಅಂಚೆ ವಿಳಾಸವನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು.
7) ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ, ಇವರು ಕಾದಿರಿಸಿಕೊಂಡಿದ್ದಾರೆ. ಇದಕ್ಕಾಗಿ ಅವರು ಯಾವುದೇ ಕಾರಣಗಳನ್ನು ನೀಡಬೇಕಾಗಿಲ್ಲ.
8) ಗುತ್ತಿಗೆ ನಡೆಸುವ ಬಗ್ಗೆ ಯಾವುದೇ ವ್ಯಾಜ್ಯ ಉಂಟಾದಲ್ಲಿ ಈ ಬಗ್ಗೆ ತೀರ್ಮಾನವನ್ನು ತೆಗೆದುಕೊಳ್ಳಲು ಬೆಂಗಳೂರಿನಲ್ಲಿರುವ ನ್ಯಾಯಾಲಯಗಳಿಗೆ ಮಾತ್ರ ಅಧಿಕಾರವಿದೆ.
9) ಈ ಗುತ್ತಿಗೆಯ ಮೊತ್ತವನ್ನು 4 ಕಂತುಗಳಲ್ಲಿ, 3 ತಿಂಗಳಿಗೊಮ್ಮೆ ಗುತ್ತಿಗೆದಾರರು ತೃಪ್ತಿಕರವಾಗಿ ನಿರ್ವಹಣೆ ಮಾಡಿರುವರು ಎಂಬುದನ್ನು ಖಚಿತಪಡಿಸಿಕೊಂಡು ನೀಡಲಾಗುವುದು.
10) ಈ ಟೆಂಡರ್‌ನಲ್ಲಿ ಭಾಗವಹಿಸುವ ಸಂಸ್ಥೆಗಳು, ಎಲ್ಲಾ ಸೇವೆಗಳಿಗೂ ಅಂದರೆ ಭದ್ರತೆ, ಸ್ವಚ್ಚತೆ ಮತ್ತು ಲಿಫ್ಟ್ ಚಾಲನೆಗೆ ಸಂಬಂಧಿಸಿದಂತೆ ಒಟ್ಟಾಗಿ ದರಗಳನ್ನು ನಮೂದಿಸಬಹುದು ಅಥವಾ ಪ್ರತಿಯೊಂದು ಸೇವೆಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಗುತ್ತಿಗೆ ದರಗಳನ್ನು ನಮೂದಿಸಬಹುದು.
11) ಭದ್ರತೆ, ಸ್ವಚ್ಚತೆ ಮತ್ತು ಲಿಫ್ಟ್ ಚಾಲನೆಗಾಗಿ ಎಷ್ಟು ಸಿಬ್ಬಂದಿಯನ್ನು ನೇಮಿಸಲಾಗುವುದು ಮತ್ತು ಈ ಸೇವೆಗಳನ್ನು ಪಾಳಿಗಳಲ್ಲಿ ನಿರ್ವಹಿಸಬೇಕಾಗಿದ್ದು, ಪ್ರತಿ ಪಾಳಿಗೆ ಪ್ರತಿ ಸೇವೆಗೆ ಎಷ್ಟು ಸಿಬ್ಬಂದಿಯನ್ನು ನೇಮಿಸಲಾಗುವುದು ಎಂಬ ಬಗ್ಗೆ ಸ್ಪಷ್ಟಪಡಿಸತಕ್ಕದ್ದು.
12) ಈ ಸೇವೆಗಳಿಗೆ ನೇಮಿಸಲ್ಪಡುವ ಅಧಿಕಾರಿ : ಸಿಬ್ಬಂದಿಗೆ ಕನಿಷ್ಠ ವೇತನ ಕಾಯಿದೆಯಡಿ ನಿಗದಿಪಡಿಸಿರುವ ವೇತನ ಅಥವಾ ಅದಕ್ಕಿಂತ ಮೇಲ್ಪಟ್ಟು ವೇತನ ನೀಡತಕ್ಕದ್ದು.
13) ಭದ್ರತೆ ಸಂಬಂಧ ಗುತ್ತಿಗೆಯನ್ನು ನೀಡುವಾಗ ಮಾಜಿ ಸೈನಿಕರನ್ನು (Ex-servicemen) ನೇಮಿಸುವಂತಹ ಸಂಸ್ಥೆಗೆ ಆದ್ಯತೆಯನ್ನು ನೀಡಲಾಗುವುದು.

**ಭದ್ರತೆ ಬಗ್ಗೆ ನಿಬಂಧನೆಗಳು:**

1) ವಿಕಾಸಸೌಧ ಕಟ್ಟಡದ ಎಲ್ಲಾ ದ್ವಾರಗಳಲ್ಲೂ ಆಂತರಿಕ ಭದ್ರತೆಗಾಗಿ ಭದ್ರತಾ ಅಧಿಕಾರಿಗಳನ್ನು ನೇಮಿಸುವುದಲ್ಲದೆ, ಎಲ್ಲಾ ಮಹಡಿಗಳಲ್ಲಿ ಭದ್ರತಾ ಸಿಬ್ಬಂದಿ ಹಾಜರಿರಬೇಕು ಮತ್ತು ಅಲ್ಲಿರುವ ಸರ್ಕಾರಿ ವಸ್ತುಗಳ ಸಂಪೂರ್ಣ ಜವಾಬ್ದಾರಿ ಅವರದ್ದಾಗಿರುತ್ತದೆ.
2) ಕಚೇರಿ ವೇಳೆಯಲ್ಲಿ ಮತ್ತು ಕಚೇರಿ ವೇಳೆಯ ನಂತರ ಎಲ್ಲಾ ಮಹಡಿಗಳಲ್ಲಿ ಭದ್ರತಾ ಸಿಬ್ಬಂದಿ ಹಾಜರಿದ್ದು, ಅಲ್ಲಿ ಓಡಾಡುವ ವ್ಯಕ್ತಿಗಳ ಮೇಲೆ ನಿಗಾ ಇಡುವುದಲ್ಲದೆ, ಸರ್ಕಾರಿ ವಸ್ತುಗಳು ಕಳ್ಳತನವಾಗದಂತೆ ಸೂಕ್ತ ವ್ಯವಸ್ಥೆಯನ್ನು ಮಾಡುವುದು. ಬೆಲೆ ಬಾಳುವ ವಸ್ತುಗಳ ಕಳ್ಳತನವಾದರೆ, ಗುತ್ತಿಗೆ ಪಡೆಯುವ ಸಂಸ್ಥೆಯನ್ನು ಜವಾಬ್ದಾರಿ ಮಾಡಲಾಗುವುದು.
3) ಬಹು ಮಹಡಿ ಕಟ್ಟಡದ 4ನೇ ಹಂತದ (ಟೌನ್ ಪ್ಲ್ಯಾನಿಂಗ್ ಕಟ್ಟಡ) ಬಳಿಯಿಂದ ರ್‍ಯಾಂಪ್ ಮೂಲಕ ವಾಹನಗಳು ಕೆಳಗೆ ಬರುವ ಸ್ಥಳದಲ್ಲಿ ಸಹ ಭದ್ರತಾ ಸಿಬ್ಬಂದಿಯನ್ನು ನೇಮಿಸತಕ್ಕದ್ದು. ಇದಲ್ಲದೆ, ಬಹು ಮಹಡಿ ಕಟ್ಟಡದ 1ನೇ ಮತ್ತು 2ನೇ ಹಂತದ ಮಧ್ಯೆ ಇರುವ ರಸ್ತೆಯಿಂದ ವಿಕಾಸಸೌಧಕ್ಕೆ ಬರಲು ಭದ್ರತಾ ಗ್ರಿಲ್ ಬಳಿ ಒಂದು ದ್ವಾರವನ್ನು ನಿರ್ಮಿಸಲಾಗಿದ್ದು, ಅಲ್ಲಿ ಸಹ ಭದ್ರತಾ ಸಿಬ್ಬಂದಿಯನ್ನು ನೇಮಿಸಬೇಕಾಗುತ್ತದೆ. ಇದಲ್ಲದೆ, ವಿಕಾಸಸೌಧ ಕಟ್ಟಡದ 3 ತಳ ಮಹಡಿಗಳನ್ನು ವಾಹನ ನಿಲುಗಡೆಗೆ ಕಾದರಿಸಲಾಗಿದ್ದು, ಆ ಸ್ಥಳದಲ್ಲೂ ಸಹ ಭದ್ರತಾ ಸಿಬ್ಬಂದಿಯನ್ನು ನೇಮಿಸತಕ್ಕದ್ದು.
4) ಭದ್ರತೆಗಾಗಿ ನೇಮಿಸಲ್ಪಡುವ ಸಿಬ್ಬಂದಿಯು ಅವರ ಕರ್ತವ್ಯಕ್ಕೆ ಬೇಕಾದ ಕನಿಷ್ಟ ವಿದ್ಯಾರ್ಹತೆ ಹೊಂದಿರತಕ್ಕದ್ದು.
5) ಭದ್ರತೆಗೆ ಸಂಬಂಧಪಟ್ಟಂತೆ ಕರ್ತವ್ಯವನ್ನು ನಿರ್ವಹಿಸುವ ಸಂಸ್ಥೆಯು ವರ್ಷವಿಡೀ ದಿನಂಪ್ರತಿ 24 ಗಂಟೆಗಳೂ ನಿರ್ವಹಿಸತಕ್ಕದ್ದು ಹಾಗೂ ಈ ಕೆಲಸವನ್ನು 3 ಪಾಳಿಗಳಲ್ಲಿ ನಿರ್ವಹಿಸಲು ಸಿಬ್ಬಂದಿಯನ್ನು ನೇಮಿಸತಕ್ಕದ್ದು.
6) ಕಚೇರಿಯಿಂದ ರಾತ್ರಿ ವೇಳೆಯಲ್ಲಿ ಎಲ್ಲರೂ ಕರ್ತವ್ಯದಿಂದ ನಿರ್ಗಮಿಸಿದ ನಂತರ ಎಲ್ಲಾ ಕೊಠಡಿಗಳನ್ನು ತಪಾಸಣೆ ಮಾಡಿ ಅಲ್ಲಿರುವ ವಿದ್ಯುತ್ ದೀಪ ಹಾಗೂ ಫ್ಯಾನ್‌ಗಳನ್ನು ಆರಿಸಿ, ನೀರಿನ ನಲ್ಲಿಗಳಲ್ಲಿ ನೀರು ಹೋಗುತ್ತಿದ್ದರೆ ನಿಲ್ಲಿಸಿ, ಕಿಟಕಿಗಳನ್ನು ಮುಚ್ಚಲಾಗಿದೆಯೇ ಎಂದು ತಪಾಸಣೆ ಮಾಡಿ ಕೊಠಡಿಗಳಿಗೆ ಬೀಗ ಹಾಕತಕ್ಕದ್ದು. ತದನಂತರ ಆ ಕಟ್ಟಡದ ಎಲ್ಲಾ ದ್ವಾರಗಳನ್ನು ಮುಚ್ಚಿ ರಾತ್ರಿ ಭದ್ರತೆಯ ವ್ಯವಸ್ಥೆಗೆ ಸೂಕ್ತ ಸಂಖ್ಯೆಯಲ್ಲಿ ಸಿಬ್ಬಂದಿಯನ್ನು ನೇಮಿಸತಕ್ಕದ್ದು. ಈ ರೀತಿ ರಾತ್ರಿ ಪಾಳಿಯಲ್ಲಿ ನೇಮಿಸುವ ಭದ್ರತಾಧಿಕಾರಿ ಮತ್ತು ಸಿಬ್ಬಂದಿಗಳ ಸಂಖ್ಯೆಯನ್ನು ನೀಡತಕ್ಕದ್ದು.

**ಸ್ವಚ್ಚತೆ ಬಗ್ಗೆ ನಿಬಂಧನೆಗಳು:**

1) ಗುತ್ತಿಗೆದಾರರು ಈ ಟೆಂಡರ್‌ನ ಅನುಬಂಧದಲ್ಲಿ ನೀಡಲಾಗಿರುವ ಎಲ್ಲಾ ಸ್ಥಳವನ್ನು ದಿನಂಪ್ರತಿ ಗುಡಿಸಿ ಸ್ವಚ್ಚವಾಗಿ ಇಡಬೇಕಾಗುತ್ತದೆ.
2) ಈ ಕಟ್ಟಡದ ಸಂಪೂರ್ಣ ನೈರ್ಮಲ್ಯದ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ.
3) ರಜಾ ದಿನಗಳಲ್ಲಿ ತುರ್ತು ಸಭೆ : ಸಮಾರಂಭಗಳು ನಡೆಯುವ ಸಂದರ್ಭ ಇದ್ದಲ್ಲಿ, ಸ್ವಚ್ಚತಾ ಕಾರ್ಯವನ್ನು ನಿರ್ವಹಿಸಲು ಕೆಲವು ಮಂದಿಯನ್ನಾದರೂ ಅಲ್ಪಕಾಲದ ಸೂಚನೆ ಮೇಲೆ ಕರ್ತವ್ಯಕ್ಕೆ ನೇಮಿಸಲು ಗುತ್ತಿಗೆದಾರರು ಸಿದ್ಧರಿರತಕ್ಕದ್ದು.

4) ಈ ಕಟ್ಟಡದಲ್ಲಿರುವ ಸಚಿವರು ಮತ್ತು ಅಧಿಕಾರಿಗಳ ಕೊಠಡಿಗಳಲ್ಲಿ ಪ್ರತ್ಯೇಕವಾಗಿ ಶೌಚಾಲಯಗಳಿದ್ದು, ಎಲ್ಲಾ ಕೊಠಡಿಗಳಲ್ಲೂ ಸಾರ್ವಜನಿಕ ಶೌಚಾಲಯಗಳು ಸಹ ಇರುತ್ತದೆ. ಅದರ ವಿವರಗಳನ್ನು ಈ ಟೆಂಡರ್‌ನ ಅನುಬಂಧದಲ್ಲಿ ಕೊಡಲಾಗಿದೆ.
5) ಈ ಶೌಚಾಲಯಗಳನ್ನು ದಿನ ಬೆಳಗ್ಗೆ 8-00 ಗಂಟೆಗೆ ಸ್ವಚ್ಛಗೊಳಿಸಿ ಸೂಕ್ತವಾಗಿ ಔಷಧಿ ಸಿಂಪಡಿಸಿ ತೊಳೆಯುವುದಲ್ಲದೆ, ಯಾವುದೇ ದುರ್ವಾಸನೆ ಬಾರದಂತೆ ಮತ್ತು ಕ್ರಿಮಿಕೀಟ ಸೇರದಂತೆ ಸೂಕ್ತವಾಗಿ ಔಷಧಿಗಳನ್ನು ಇಡತಕ್ಕದ್ದು. ಈ ಕ್ರಮವನ್ನು ಮತ್ತೆ ಮಧ್ಯಾಹ್ನ 12-00 ಗಂಟೆ ಹಾಗೂ ಸಂಜೆ 4-00 ಗಂಟೆಗೆ ಮುಂದುವರೆಸತಕ್ಕದ್ದು.
6) ಸ್ವಚ್ಛತೆ ಸಿಬ್ಬಂದಿ ಬೆಳಗ್ಗೆ 7-00 ಗಂಟೆಯಿಂದ ಮಧ್ಯಾಹ್ನ 3-00 ಗಂಟೆವರೆಗೆ ಕಾರ್ಯ ನಿರ್ವಹಿಸತಕ್ಕದ್ದು. 3-00 ಗಂಟೆಯ ನಂತರ ತುರ್ತು ಸ್ವಚ್ಛತಾ ಕೆಲಸ ಹಾಗೂ ಶೌಚಾಲಯಗಳಿಗೆ ಔಷಧಿ ಸಿಂಪಡಿಸುವ ಕೆಲಸಗಳಿಗೆ ಕೆಲವು ಮಂದಿ ಸ್ವಚ್ಛತಾ ಸಿಬ್ಬಂದಿಯನ್ನು ಕಾದಿರಿಸತಕ್ಕದ್ದು.
7) ಕೊಳೆ, ಅನುಪಯುಕ್ತ ವಸ್ತುಗಳು, ಚೆಲ್ಲಿರುವ ವಸ್ತುಗಳು ಇತ್ಯಾದಿಗಳನ್ನು ಸ್ವಚ್ಛಗೊಳಿಸತಕ್ಕದ್ದು.
8) ಸ್ವಚ್ಛತಾ ಸಿಬ್ಬಂದಿಯ ಮೇಲ್ವಿಚಾರಣೆಗೆ ಅನುಭವಸ್ಥ ಮೇಲ್ವಿಚಾರಕರನ್ನು ನೇಮಿಸತಕ್ಕದ್ದು. ಕನಿಷ್ಠ ವಾರಕ್ಕೆ ಎರಡು ಬಾರಿ ಎಲ್ಲಾ ಮಹಡಿಗಳ ನೆಲವನ್ನು ಜೆಟ್ ಕ್ಲೀನಿಂಗ್ ಮುಖಾಂತರ ಸ್ವಚ್ಛಗೊಳಿಸುವುದು.
9) ನಾಮ ಫಲಕಗಳಲ್ಲಿ ಧೂಳು ತುಂಬಿದಲ್ಲಿ, ಅವುಗಳನ್ನು ಆಗಿಂದಾಗ್ಗೆ ಸ್ವಚ್ಛಗೊಳಿಸತಕ್ಕದ್ದು.
10) ಕೊಠಡಿ ಹಾಗೂ ಶೌಚಾಲಯಗಳ ಸ್ವಚ್ಛತೆಯನ್ನು ಬೆಳಗ್ಗೆ 9-30ರೊಳಗೆ ಮುಗಿಸತಕ್ಕದ್ದು.
11) ಇದಲ್ಲದೇ, ಸಂಬಂಧಪಟ್ಟ ಅಧಿಕಾರಿಗಳು ಈ ವಿಷಯದಲ್ಲಿ ನೀಡುವ ಸೂಚನೆಗಳನ್ನು ಪಾಲಿಸತಕ್ಕದ್ದು.
12) ಈ ಕೆಲಸಗಳಿಗಾಗಿ ನೇಮಿಸುವ ಸಿಬ್ಬಂದಿಯು ಕನಿಷ್ಠ ವಿದ್ಯಾರ್ಹತೆ ಮತ್ತು ಅಗತ್ಯ ಅನುಭವ ಹೊಂದಿರತಕ್ಕದ್ದು.

**ಲಿಫ್ಟ್ ಬಗ್ಗೆ ನಿಬಂಧನೆಗಳು:**

1) ಒಟ್ಟು 7 ಸಂಖ್ಯೆಯ ಲಿಫ್ಟ್‌ಗಳು ಈ ಕಟ್ಟಡದಲ್ಲಿ ಇದ್ದು, ಈ ಲಿಫ್ಟ್‌ಗಳನ್ನು ಬೆಳಿಗ್ಗೆ 8-00 ರಿಂದ ರಾತ್ರಿ ಎಲ್ಲಾ ಸಚಿವರು : ಅಧಿಕಾರಿಗಳು : ನೌಕರರು ಕಚೇರಿಯಿಂದ ನಿರ್ಗಮಿಸುವವರೆಗೆ ಚಾಲನೆಯಲ್ಲಿ ಇಡತಕ್ಕದ್ದು.
2) ವಿಧಾನ ಮಂಡಲದ ಅಧಿವೇಶನ ನಡೆಯುವ ಸಮಯದಲ್ಲಿ ಹೆಚ್ಚಿನ ಅಧಿಕಾರಿ : ಸಿಬ್ಬಂದಿ ರಾತ್ರಿ ಬಹಳ ಹೊತ್ತಿನವರೆಗೆ ಕರ್ತವ್ಯ ನಿರ್ವಹಿಸಬೇಕಾಗಿದ್ದು, ಅಂತಹ ಸಮಯದಲ್ಲಿ ರಾತ್ರಿ 8-00 ಗಂಟೆಯ ನಂತರ ಕನಿಷ್ಠ 2 ಲಿಫ್ಟ್‌ಗಳು ಚಾಲನೆಯಲ್ಲಿರತಕ್ಕದ್ದು.
3) ಎಲ್ಲಾ ರಜಾ ದಿನಗಳಲ್ಲಿ ಸಹ ಕನಿಷ್ಠ 2 ಲಿಫ್ಟ್ ಚಾಲನೆಯಲ್ಲಿ ಇರತಕ್ಕದ್ದು
4) ಈ ಕೆಲಸಗಳಿಗೆ ನೇಮಿಸುವ ಸಿಬ್ಬಂದಿಯು ಕನಿಷ್ಠ ವಿದ್ಯಾರ್ಹತೆ ಹಾಗೂ ನುರಿತ ಅನುಭವ ಹೊಂದಿರತಕ್ಕದ್ದು

**ಯಶಸ್ವಿ ಟೆಂಡರ್‌ದಾರರು / ಗುತ್ತಿಗೆದಾರರು ಈ ಕೆಳಕಂಡ ಷರತ್ತುಗಳನ್ನು ಪಾಲಿಸಲು ಸಿದ್ಧರಿರತಕ್ಕದ್ದು:-**

1) ಗುತ್ತಿಗೆದಾರರು ನೇಮಿಸುವ ಅಧಿಕಾರಿ / ಸಿಬ್ಬಂದಿಯ ಹಿನ್ನೆಲೆ ಬಗ್ಗೆ ಸಂಬಂಧಿಸಿದ ಪೋಲೀಸ್ ಅಧಿಕಾರಿಯಿಂದ ದೃಢೀಕರಿಸಲ್ಪಡತಕ್ಕದ್ದು
2) ಗುತ್ತಿಗೆಯನ್ನು ಪಡೆದ 30 ದಿನಗಳೊಳಗಾಗಿ ತನ್ನ ಸಿಬ್ಬಂದಿಗೆ ಸಮೂಹ ವಿಮೆಯನ್ನು ಮಾಡಿಸತಕ್ಕದ್ದು.
3) ಕಾರ್ಯ ನಿರ್ವಹಣೆ ವೇಳೆಯಲ್ಲಿ ಗುತ್ತಿಗೆದಾರರ ನೌಕರರು ಯಾವುದೇ ರೀತಿಯ ಅಪಘಾತಕ್ಕೆ ಈಡಾದಲ್ಲಿ ಸಂಬಂಧಪಟ್ಟ ನೌಕರರು / ಅವರ ಕುಟುಂಬಕ್ಕೆ ನಿಯಮಾನುಸಾರ ಪರಿಹಾರ ನೀಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.
4) ಗುತ್ತಿಗೆಯನ್ನು ಯಾವುದೇ ಸಮಯದಲ್ಲೂ 30 ದಿವಸಗಳ ನೋಟೀಸ್ ನೀಡುವ ಮೂಲಕ ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.
5) ಗುತ್ತಿಗೆದಾರರು ಕಾರ್ಮಿಕ ಇಲಾಖೆ / ಇಎಸ್ಐ / ಭವಿಷ್ಯ ನಿಧಿ ಇತ್ಯಾದಿ ಇಲಾಖೆಗಳು ನಿಗದಿಪಡಿಸಿರುವ ಅಗತ್ಯ ನೀತಿ : ನಿಯಮಗಳನ್ನು ಪಾಲಿಸಿರುವ / ಪಾಲಿಸುವ ಬಗ್ಗೆ ದೃಢೀಕರಿಸತಕ್ಕದ್ದು.
6) ಗುತ್ತಿಗೆದಾರರು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಕರಾರು ಒಪ್ಪಂದ ಪತ್ರವನ್ನು ಸಹಿ ಹಾಕಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ಒಪ್ಪಂದ ಪತ್ರವನ್ನು ಸಲ್ಲಿಸಲು ವಿಫಲರಾದಲ್ಲಿ ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7) ಗುತ್ತಿಗೆದಾರರು ನೇಮಿಸುವ ಭದ್ರತೆ ಹಾಗೂ ಸ್ವಚ್ಛತಾ ಸಿಬ್ಬಂದಿ ಮತ್ತು ಲಿಫ್ಟ್ ಚಾಲನೆಗೆ ನೇಮಿಸಲ್ಪಡುವ ಸಿಬ್ಬಂದಿ ಮತ್ತು ಅಧಿಕಾರಿಗಳ ನಿವಾಸದ ವಿಳಾಸ, ಊರಿನ ವಿಳಾಸ ಹಾಗೂ ಅವರ ಭಾವಚಿತ್ರಗಳೊಂದಿಗೆ ವಿವರಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ನೀಡತಕ್ಕದ್ದು ಹಾಗೂ ವಿಳಾಸ ದೃಢೀಕರಣ ದಾಖಲೆ ಒದಗಿಸತಕ್ಕದ್ದು.
8) ವಿವಿಧ ಸೇವೆಗಳಿಗೆ ನೇಮಿಸಲ್ಪಡುವ ನೌಕರರನ್ನು ಆಗಿಂದಾಗ್ಗೆ ಬದಲಾಯಿಸಕೂಡದು
9) ಗುತ್ತಿಗೆಯನ್ನು ಪಡೆಯುವ ಸಂಸ್ಥೆಯು ವಿವಿಧ ಕೆಲಸಗಳನ್ನು ನಿರ್ವಹಿಸುವ ತಮ್ಮ ನೌಕರರಿಗೆ ಅವರವರ ಕೆಲಸದನುಸಾರ ಸಮವಸ್ತ್ರವನ್ನು ನೀಡತಕ್ಕದ್ದು ಮತ್ತು ನೌಕರರ ಹೆಸರು, ನಿರ್ವಹಿಸುವ ಕೆಲಸ ಇವೇ ಮುಂತಾದ ವಿವರಗಳನ್ನು ಒಳಗೊಂಡ ಗುರುತಿನ ಚೀಟಿಯನ್ನು ಅವರಿಗೆ ನೀಡಿ, ಕರ್ತವ್ಯದ ವೇಳೆಯಲ್ಲಿ ಅದನ್ನು ಪ್ರದರ್ಶಿಸಲು ಸೂಚಿಸತಕ್ಕದ್ದು.
10) ಅನುಬಂಧದಲ್ಲಿ ನಮೂದಿಸಿರುವ ಪೂರ್ತಿ ಅಗತ್ಯತೆ ಇಲ್ಲದಿದ್ದಲ್ಲಿ, ಗುತ್ತಿಗೆದಾರರು ಸೂಚಿಸಿರುವ ಒಟ್ಟು ಸಿಬ್ಬಂದಿ ಸಹ ಅಗತ್ಯ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಗುತ್ತಿಗೆ ಹಣವನ್ನು ಅಗತ್ಯವಿರುವ ಸಿಬ್ಬಂದಿಗನುಗುಣವಾಗಿ ಕಡಿತಗೊಳಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ರವಿಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

**ಟೆಂಡರ್ ಪ್ರಕಟಣೆ ಸಂಖ್ಯೆ: ಸಿಆಸುಇ 126 ಡಿಬಿಎಂ 2005, ದಿನಾಂಕ: 11-11-2005ರ ಅನುಬಂಧ**
**ಹೊಸ ವಿಕಾಸಸೌಧ ಕಟ್ಟಡದ ಒಟ್ಟು ಸ್ಥಳಾವಕಾಶದ ವಿವರಗಳು ಈ ಕೆಳಕಂಡಂತೆ ಇವೆ.**

| ಕ್ರಮ ಸಂಖ್ಯೆ | ಮಹಡಿಗಳು | ಒಟ್ಟು ಸ್ಥಳಾವಕಾಶ ಚದರ ಮೀಟರ್‌ಗಳಲ್ಲಿ |
|---|---|---|
| 1. | ತಳ ಮಹಡಿ-1 | 7,958 ಚ.ಮೀ. |
| 2. | ತಳ ಮಹಡಿ-2 | 7,958 ಚ.ಮೀ. |
| 3. | ತಳ ಮಹಡಿ-3 | 7,958 ಚ.ಮೀ. |
| 4. | ನೆಲಮಹಡಿ | 6,880 ಚ.ಮೀ |
| 5. | ಮೊದಲನೇ ಮಹಡಿ | 6,880 ಚ.ಮೀ |
| 6. | ಎರಡನೇ ಮಹಡಿ | 6,880 ಚ.ಮೀ |
| 7. | ಮೂರನೇ ಮಹಡಿ | 6,880 ಚ.ಮೀ |
| 8. | ನಾಲ್ಕನೇ ಮಹಡಿ | 6,880 ಚ.ಮೀ |
| **ಒಟ್ಟು ಸ್ಥಳಾವಕಾಶ** | | **58,274 ಚ.ಮೀ** |

**ಕಾರಿಡಾರ್, ಪೋರ್ಟಿಕೋ, ಸ್ಟೇರ್‌ಕೇಸ್ ಹಾಗೂ ಮತ್ತಿತರ ಸಾಮಾನ್ಯ ಉಪಯೋಗದ ಸ್ಥಳಾವಕಾಶ**

| ಕ್ರ ಸಂ | ಮಹಡಿ | ಸಾಮಾನ್ಯ ಉಪಯೋಗದ ಸ್ಥಳಾವಕಾಶ | ಸ್ಥಳಾವಕಾಶ ಚದರ ಮೀಟರ್‌ಗಳಲ್ಲಿ | ಪಾರ್ಕಿಂಗ್ |
|---|---|---|---|---|
| 1 | Basement -1 | Staircase | 150.60 | 7807.40 |
| 2 | Basement-2 | Staircase | 150.60 | 7807.40 |
| 3 | Basement-3 | Staircase | 150.60 | 7407.00 |
| 4 | Ground floor | Lobby, Grand steps, corridor, staircase portico, quadrangles | 2875.53 | - |
| 5 | 1st floor | Lobby, corridor, staircase and cafeteria open area | 1420.21 | - |
| 6 | 2nd floor | Lobby, porticos, corridor, staircase | 2302.94 | - |
| 7 | 3rd floor | Lobby, corridor, staircase | 1391.53 | - |
| 8 | 4th floor | Lobby, corridor, staircase | 1769.65 | - |
| 9 | 5th floor | Staircase and domes inside | 1153.00 | - |
| | | **Total** | **11364.66 sq.mtr** | **23021.80 sq.mtr.** |

**ಈ ಕಟ್ಟಡದಲ್ಲಿರುವ ಕೊಠಡಿಗಳ ಸಂಖ್ಯೆ ಈ ಕೆಳಗಿನಂತೆ ಇದೆ:**

| ಕ್ರ ಸಂ | ಮಹಡಿ | ಮಂತ್ರಿಗಳು ಅವರ ಸಿಬ್ಬಂದಿ ಕಚೇರಿ ಸೇರಿದಂತೆ | ಕಾರ್ಯದರ್ಶಿಯವರ ಸಿಬ್ಬಂದಿ | ಕಚೇರಿಗಳು | ಲೈಬ್ರರಿ, ರೆಕಾರ್ಡ್, ಕೆಫೆಟೇರಿಯಾ, ಮೀಟಿಂಗ್ ಹಾಲ್ | ಒಟ್ಟು |
|---|---|---|---|---|---|---|
| 1 | ನೆಲಮಹಡಿ | 3 | 6 | 7 | 1 | 17 |
| 2 | 1ನೇ ಮಹಡಿ | 3 | 6 | 11 | 5 | 25 |
| 3 | 2ನೇ ಮಹಡಿ | 4 | 7 | 8 | 8 | 27 |
| 4 | 3ನೇ ಮಹಡಿ | 2 | 6 | 14 | 3 | 25 |
| 5 | 4ನೇ ಮಹಡಿ | 3 | 8 | 8 | 5 | 24 |
| | | 15 | 33 | 48 | 22 | 118 |

**ಲಿಫ್ಟ್‌ಗಳು**
**ಈ ಕಟ್ಟಡದಲ್ಲಿ ಒಟ್ಟು 7 ಲಿಫ್ಟ್‌ಗಳಿವೆ. ಅವುಗಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ:**

1) Traction Lifts - 20 ಜನರನ್ನು ಹೊರುವ ಸಾಮರ್ಥ್ಯವುಳ್ಳದ್ದು - 5 ಸಂಖ್ಯೆ
2) Capsule Lifts - 13 ಜನರನ್ನು ಹೊರುವ ಸಾಮರ್ಥ್ಯವುಳ್ಳದ್ದು - 2 ಸಂಖ್ಯೆ

**ಸಾಮಾನ್ಯ ಶೌಚಾಲಯಗಳು**

| ಕ್ರ. ಸಂ. | ಮಹಡಿ | Urinals ಸಂಖ್ಯೆ | ವಾಷ್ ಬೇಸಿನ್ ಸಂಖ್ಯೆ | Water closet | ಒಟ್ಟು ಸ್ಥಳಾವಕಾಶ ಚದರ ಮೀಟರ್‌ಗಳಲ್ಲಿ | |
|---|---|---|---|---|---|---|
| | | | | | ಕಚೇರಿ Sq.mtr | ಶೌಚಾಲಯ Sq.mtr |
| 1 | 2 | 3 | 4 | 5 | 6 | 7 |
| 1 | ತಳಮಹಡಿ-1 | 8 | 4 | 2 | 22.36 | 38.60 |
| 2 | ತಳಮಹಡಿ-2 | 8 | 4 | 2 | 22.36 | 38.60 |
| 3 | ತಳಮಹಡಿ-3 | 8 | 4 | 2 | 22.36 | 38.60 |
| 4 | ತಳಮಹಡಿ (ರಹಸ್ಯ ಮುದ್ರಣಾಲಯ) | 2 | 2 | 3 | 512.39 | 38.60 |
| | | | | **ಒಟ್ಟು** | **579.47 sq.mtr** | **154.40 sq.mtr** |

| 1 | 2 | 3 | 4 | 5 | 6 | 7 |
|---|---|---|---|---|---|---|
| 5 | ನೆಲಮಹಡಿ | 15 | 32 | 33 | 2,171.54 | 181.10 |
| 6 | 1ನೇ ಮಹಡಿ | 14 | 34 | 34 | 3,049.51 | 197.59 |
| 7 | 2ನೇ ಮಹಡಿ | 14 | 37 | 37 | 2,651.36 | 198.56 |
| 8 | 3ನೇ ಮಹಡಿ | 14 | 35 | 35 | 4,012.95 | 189.90 |
| 9 | 4ನೇ ಮಹಡಿ | 21 | 35 | 37 | 3,200.92 | 1,279.73 |
| | | | | **Grand total** | **15,665.75 sq.mtr** | **2,201.28 sq.mtr** |

**ಸ್ವಚ್ಛತಾ ಕಾರ್ಯವನ್ನು ನಿರ್ವಹಿಸಬೇಕಾದ ಸ್ಥಳ**

ಸಂಪೂರ್ಣ ಕಟ್ಟಡ (ಕಚೇರಿ ಕೊಠಡಿಗಳು, ಯೂರಿನಲ್ಸ್, ವಾಷ್ ಬೇಸಿನ್ಸ್, ಶೌಚಾಲಯ, ಕನ್ನಡಿಗಳು, ಕಾರಿಡಾರ್, ಪ್ಯಾಸೇಜ್, ಗ್ರ್ಯಾಂಡ್ ಸ್ಟೆಪ್ಸ್, ಮಹಡಿಗಳು, ಲಾಬಿ, 3 ತಳ ಮಹಡಿಗಳಲ್ಲಿ ವಾಹನ ನಿಲುಗಡೆ ಪ್ರದೇಶ, ಸಾಮಾನ್ಯವಾಗಿ ಉಪಯೋಗಿಸುವ ಕಚೇರಿ ಸ್ಥಳ, ಪೋರ್ಟಿಕೋ, ಸಮಿತಿ ಕೊಠಡಿಗಳು, ಸಮ್ಮೇಳನ ಸಭಾಂಗಣ, ಕೋರ್ಟ್ ಹಾಲ್ ಇತ್ಯಾದಿ)

**ಹೆಚ್.ಕೆ. ರವಿಮೂರ್ತಿ**

ಪಿ.ಆರ್.627 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

## ಉಪ ಕೃಷಿ ನಿರ್ದೇಶಕರ ಕಛೇರಿ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ.ಶಾಲಾ, ಚಂದಾಪುರ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ

## ಹರಾಜಿನ ಪ್ರಕಟಣೆ

### ಸಂಖ್ಯೆ:ಉಕೃನಿ:ಜಿಕೃತಕೇ:ಆರ್.ಕೆ.ಶಾಲಾ,ಹುಣಿಸೆ ಫಸಲು, 390 /05-06, ದಿನಾಂಕ: 14ನೇ ನವೆಂಬರ್, 2005

**ಸಂಖ್ಯೆ :** ಉಕೃನಿ: ಜಿಕೃತಕೇ:ಆರ್.ಕೆ. ಶಾಲಾ: ಹುಣಸೆ: ತೆಂಗು: ಗೋಡಂಬಿ: ಹಲಸು ಮರದ ಫಸಲು: ಟೆಂಡರ್: ಕಂ-ಹರಾಜು ಪ್ರಕಟಣೆ: 2005-06:390 ದಿನಾಂಕ: 14.11.2005.

**ವಿಷಯ :** ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ. ಶಾಲೆಯ ಕ್ಷೇತ್ರದಲ್ಲಿರುವ 23 ಹುಣಸೆ, 37 ತೆಂಗು, 31 ಗೋಡಂಬಿ ಮತ್ತು 11 ಹಲಸು ಮರಗಳ ಫಸಲನ್ನು ಟೆಂಡರ್: ಕಂ:ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಚಂದಾಪುರ ಅಂಚೆ, ರಾಮಕೃಷ್ಣಪುರ ಗ್ರಾಮ, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಆರ್.ಕೆ. ಶಾಲೆಯ ಆವರಣದಲ್ಲಿ ದಿನಾಂಕ: 31.12.2005ನೇ ಶನಿವಾರದಂದು ಬೆಳಿಗ್ಗೆ 11.30 ಗಂಟೆಗೆ ಸರಿಯಾಗಿ ಸರ್ಕಾರಿ ಹರಾಜು ನಿಯಮಾವಳಿಗನುಸಾರವಾಗಿ ಈ ಕ್ಷೇತ್ರದಲ್ಲಿರುವ 23 ಹುಣಸೆ, 37 ತೆಂಗು, 31 ಗೋಡಂಬಿ ಮತ್ತು 11 ಹಲಸು ಮರಗಳ ಫಸಲನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು ಇಚ್ಛಿಯುಳ್ಳ ಸಾರ್ವಜನಿಕರು ಈ ಕೆಳಗೆ ನಮೂದಿಸಿರುವ ಠೇವಣಿ ಹಣವನ್ನು ಕಟ್ಟುವ ಮೂಲಕ ಅಂದಿನ ಹರಾಜಿನಲ್ಲಿ ಭಾಗವಹಿಸುವುದು.

1) 23 ಹುಣಸೆ ಮರದ ಫಸಲು ಠೇವಣಿ ಹಣ ರೂ.2000
2) 37 ತೆಂಗು ಮರದ ಫಸಲು ಠೇವಣಿ ಹಣ ರೂ.500
3) 31 ಗೋಡಂಬಿ ಮರದ ಫಸಲು ಠೇವಣಿ ಹಣ ರೂ.500
4) 11 ಹಲಸು ಮರದ ಫಸಲು ಠೇವಣಿ ಹಣ ರೂ.500

ಮೇಲೆ ತಿಳಿಸಿರುವ ಎಲ್ಲಾ ಮರದ ಫಸಲನ್ನು ನೋಡಬಯಸುವವರು ಹೆಚ್ಚಿನ ವಿವರಗಳಿಗಾಗಿ ಕಛೇರಿ ಕೆಲಸದ ವೇಳೆಯಲ್ಲಿ (ಬೆಳಿಗ್ಗೆ 10-00 ರಿಂದ ಸಾಯಂಕಾಲ 5-00 ಗಂಟೆಯವರೆಗೆ) ಖುದ್ದಾಗಿ ಸಂಪರ್ಕಿಸಬಹುದಾಗಿದೆ. ಸದರಿ ಬಹಿರಂಗ ಹರಾಜಿನಲ್ಲಿ ಮತ್ತು ಟೆಂಡರ್‌ನಲ್ಲಿ ಪಾಲ್ಗೊಳ್ಳಲು ಆಸಕ್ತಿಯುಳ್ಳ ಸಾರ್ವಜನಿಕರು ಮೊಹರು ಮಾಡಿದ ಟೆಂಡರ್ ಲಕೋಟೆಯಲ್ಲಿ **ದಿನಾಂಕ: 28.12.2005 ರಂದು ಮಧ್ಯಾಹ್ನ 2.00 ಗಂಟೆಯೊಳಗಾಗಿ** ಈ ಕಛೇರಿಗೆ ಸಲ್ಲಿಸಲು ಸೂಚಿಸಿದೆ. ಸದರಿ ಹರಾಜಿನ ದಿನಾಂಕ: 31.12.2005ರಂದು ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು ಬಹಿರಂಗ ಹರಾಜಿನ ನಂತರ ಇಲಾಖೆಯ ಹಿರಿಯ ಅಧಿಕಾರಿಯ ಸಮ್ಮುಖದಲ್ಲಿ ತೆರೆದು ದಾಖಲೆ ಮಾಡುವುದು ಎಂಬುದಾಗಿ ಸೂಚಿಸಿದೆ. ಅತಿ ಹೆಚ್ಚಿನ ಬಿಡ್ಡುದಾರರಿಗೆ ಅಂಗೀಕಾರ ಬೆಂಗಳೂರು ನಗರ ಜಿಲ್ಲೆಯ ಜಂಟಿ ಕೃಷಿ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ. ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಅಂತಿಮ ಸವಾಲು ಅಂಗೀಕಾರವಾದಲ್ಲಿ ಅಂತಿಮ ಸವಾಲಿನ ಶೇ.25 ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಲು ಸಿದ್ಧವಾಗಿರಬೇಕು. ಸದರಿ ಬಹಿರಂಗ ಹರಾಜಿಗೆ ಅಂತಿಮ ಸವಾಲು ಮೊತ್ತಕ್ಕೆ ಮಾರಾಟ ತೆರಿಗೆ ಶೇ.4 ಪ್ರತ್ಯೇಕ ಹಾಗೂ ಅದಕ್ಕೆ ಸೆಸ್ಸು ಶೇ.5 ಪ್ರತ್ಯೇಕವಾಗಿ ಕಟ್ಟಬೇಕಾಗಿರುತ್ತದೆ.

ಉಪ ಕೃಷಿ ನಿರ್ದೇಶಕರು,

ಪಿ.ಆರ್.633 ಜಿಲ್ಲಾ ಕೃಷಿ ತರಬೇತಿ ಕೇಂದ್ರ ಆರ್.ಕೆ. ಶಾಲಾ. ಆನೇಕಲ್.

## ಲೋಕೋಪಯೋಗಿ ಇಲಾಖೆ

## ಕಾರ್ಯನಿರ್ವಾಹಕ ಅಭಿಯಂತರರು, ವಿಜಾಪುರ ವಿಭಾಗ, ವಿಜಾಪುರ

## ಗುತ್ತಿಗೆ ಆಹ್ವಾನ ಪ್ರಕಟಣೆ

### ಸಂಖ್ಯೆ:ಲೋಇ./ವಿ.ವಿ/ಬಿಜೆ/ಸ೦ಂ2/ ಆಯವ್ಯಯ/ 2005-06/ 2995, ದಿನಾಂಕ: 10ನೇ ನವೆಂಬರ್, 2005

ಈ ಕೆಳಕಂಡ ಕಾಮಗಾರಿಗಳಿಗೆ ನೊಂದಾಯಿಸಿದ ಗುತ್ತಿಗೆದಾರರಿಂದ ಐಟಂವಾರು ಮೊಹರು ಬಂದ ಟೆಂಡರ್‌ಗಳನ್ನು ದ್ವಿಪ್ರತಿಯಲ್ಲಿ ದಿನಾಂಕ: 20.12.2005 ರಂದು ಭಾರತೀಯ ಕಾಲಮಾನ ಮಧ್ಯಾಹ್ನ 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

ಸದರಿ ಕೆಲಸಗಳ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: 12.12.2005ರಂದು ಕಛೇರಿಯ ವೇಳೆಯಲ್ಲಿ ಸಲ್ಲಿಸುವುದು ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ: 16.12.2005 ಕಛೇರಿಯ ವೇಳೆಯಲ್ಲಿ ಪಡೆಯಬಹುದು.

ಟೆಂಡರ್ ಫಾರಂಗಳ ಬೆಲೆಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ವಿಭಾಗ, ವಿಜಾಪುರ ಇವರ ಹೆಸರಿನಲ್ಲಿ ಸಂದಾಯವಾಗುವಂತೆ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಅರ್ಜಿ ಜೊತೆ ಸಲ್ಲಿಸುವುದು. ಈ ಮೊತ್ತವನ್ನು ಯಾವುದೇ ಕಾರಣದಿಂದ ಹಿಂದುರುಗಿಸಲಾಗುವುದಿಲ್ಲ.

ಗುತ್ತಿಗೆಗೆ ಸಂಬಂಧಿಸಿದ ಅಂದಾಜು ಪಟ್ಟಿ ಕಛೇರಿಯ ವೇಳೆಯಲ್ಲಿ ನೋಡಬಹುದು, ಮೇಲೆ ನಮೂದಿಸಿರುವ ದಿನಾಂಕಗಳು ಸಾರ್ವತ್ರಿಕ ರಜಾ ದಿನಗಳೆಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿನವನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟಿರುವ ಅಂದಾಜು ಮೊತ್ತ ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ತೆರಿಗೆ ಸಹಿತ ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ | ಕಾಮಗಾರಿಗಳಿಗೆ ನಿಗದಿಪಡಿಸಿರುವ ಅವಧಿ ಮಳೆಗಾಲ ಸಹಿತ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ವಿಜಾಪುರದಲ್ಲಿ ಜಿಲ್ಲಾ ನ್ಯಾಯಾಲಯ ಕಟ್ಟಡದ ಮೂರನೆ ಹಂತದಲ್ಲಿ ಬಾರ್ ಅಸೋಷಿಯೇಶನ್/ ಡಿ.ಜಿ.ಪಿ/ಎ.ಜಿ.ಪಿ. ಮತ್ತು ಇತರೇ ಕಛೇರಿಗಳನ್ನು ನಿರ್ಮಿಸುವುದು. | 75.00 | 75000/- | 5500/- | ಒಂದನೇ ದರ್ಜೆ | 9 ತಿಂಗಳು |
| 2. | ವಿಜಾಪುರದಲ್ಲಿಯ ಹೊಸ ಪ್ರವಾಸಿ ಮಂದಿರದಲ್ಲಿ ಹೊಸ ಕೋಣೆಗಳನ್ನು ನಿರ್ಮಿಸುವುದು. | 50.00 | 50000/- | 3300/- | -ಸದರ- | 6 ತಿಂಗಳು |
| 3. | ವಿಜಾಪುರ ಸಹಾಯಕ ನಿರ್ದೇಶಕರು, ನಗರ ಯೋಜನಾ ಕಛೇರಿ ನಿರ್ಮಿಸುವುದು. | 50.00 | 50000/- | 3300/- | -ಸದರ- | 6 ತಿಂಗಳು |
| 4. | ಇಂಡಿ ತಾಲ್ಲೂಕಿನ ಝಳಕಿಯಲ್ಲಿ ಸರಕಾರಿ ಪದವಿ ಪೂರ್ವ ಕಾಲೇಜು ಕಟ್ಟಡ ನಿರ್ಮಾಣ. | 8.00 | 16000/- | 1100/- | ಮೂರನೇ ದರ್ಜೆ ಹಾಗೂ ಮೇಲ್ಪಟ್ಟು | 6 ತಿಂಗಳು |
| 5. | ವಿಜಾಪುರ ಸೈನಿಕ ಶಾಲೆಯ ಆವರಣದಲ್ಲಿರುವ ವಸತಿ ಗೃಹಗಳಿಗೆ ನವೀಕರಣ ಮಾಡಿ ಸುಧಾರಣೆ ಮಾಡುವುದು. | 27.00 | 27000/- | 3300/- | ಒಂದನೇ ದರ್ಜೆ | 6 ತಿಂಗಳು |
| 6. | ವಿಜಾಪುರದಲ್ಲಿ ವಾಣಿಜ್ಯ ತೆರಿಗೆ ಕಛೇರಿ ಕಟ್ಟಡ ನಿರ್ಮಾಣ (ಎರಡನೆ ಹಂತ) | 100.00 | 100000/- | 5500/- | -ಸದರ- | 12 ತಿಂಗಳು |
| 7. | ಸಿಂಧಗಿ ಪಟ್ಟಣದಲ್ಲಿ ಲೋಕೋಪಯೋಗಿ ಇಲಾಖೆ ಪ್ರವಾಸಿ ಮಂದಿರಕ್ಕೆ ಅನೆಕ್ಸರ ಕಟ್ಟಡ ನಿರ್ಮಾಣ. | 33.00 | 33000/- | 3300/- | -ಸದರ- | 6 ತಿಂಗಳು |
| 8. | ಸಿಂಧಗಿ ಪಟ್ಟಣದಲ್ಲಿ ಲೋಕೋಪಯೋಗಿ ಇಲಾಖೆ ಉಪವಿಭಾಗ ಕಛೇರಿ ಕಟ್ಟಡ ನಿರ್ಮಾಣ. | 28.50 | 28500/- | 3300/- | -ಸದರ- | 6 ತಿಂಗಳು |
| 9. | ವಿಜಾಪುರದಲ್ಲಿ ಅಬಕಾರಿ ಕಛೇರಿ ಸಿಬ್ಬಂದಿಗಳ ವಸತಿ ಗೃಹಗಳನ್ನು ನಿರ್ಮಿಸುವುದು. | 15.00 | 22500/- | 2200/- | ಎರಡನೆ ದರ್ಜೆ ಹಾಗೂ ಮೇಲ್ಪಟ್ಟು | 6 ತಿಂಗಳು |

**ನಿಬಂಧನೆಗಳು:**

1) ಗುತ್ತಿಗೆದಾರರು ಇಂಥಹದೆಯಾದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಮೊತ್ತದ ಕಾಮಗಾರಿಗಳನ್ನು ಹಿಂದಿನ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ಣಗೊಳಿಸಿರಬೇಕು. (ಕಾಮಗಾರಿ ಮೊತ್ತವನ್ನು ಕಾಮಗಾರಿ ಪೂರ್ತಿಗೊಂಡ ಆರ್ಥಿಕ ವರ್ಷದಿಂದ ಈ ವರ್ಷದವರೆಗೆ ಶೇಕಡಾ 10ರಷ್ಟಂತೆ ಪ್ರತಿ ವರ್ಷಕ್ಕೆ ಲೆಕ್ಕ ಹಾಕುವುದು. ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಬಿಲ್ ಆಗಿರಬೇಕು) ಸದರ ಪ್ರಮಾಣ ಪತ್ರವನ್ನು ಕಾರ್ಯನಿರ್ವಾಹಕ ಅಭಿಯಂತರವರ ಅಥವಾ ಮೇಲ್ಪಟ್ಟ ಅಧಿಕಾರಿಗಳಿಂದ ಇಲ್ಲದೇ ನೋಟರಿಯವರಿಂದ ದೃಢೀಕರಿಸಿ ಅರ್ಜಿಯೊಂದಿಗೆ ಸಲ್ಲಿಸುವುದು.

2) ಪ್ರಕಟಣೆಯಲ್ಲಿ ನಮೂದಿಸಿದ ಕಾಮಗಾರಿಗಳಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲಿಕತ್ವ ಹೊಂದಿರಬೇಕು. ಅಥವಾ ಬಾಡಿಗೆ ಆಧಾರದಲ್ಲಿ ತರುವವರು. ಸೂಕ್ತ ಬಾಡಿಗೆ ಕರಾರು ಪತ್ರವನ್ನು ಅವಶ್ಯಕ ದಾಖಲಾತಿಗಳೊಂದಿಗೆ ನೋಟರಿಯವರಿಂದ ದೃಢೀಕರಿಸಿ ಅರ್ಜಿಯೊಂದಿಗೆ ಸಲ್ಲಿಸುವುದು.

   i) ಕಾಂಕ್ರಿಟ್ ಮಿಕ್ಸರ್-1 ನಂ.

   ii) ಪಿನ್ ವೈಬ್ರೇಟರ್-1 ನಂ.

iii) ಪ್ಲೇಟ್ ವೈಬ್ರೇಟರ್-1 ನಂ.

iv) ಸ್ಟೀಲ್ ಸೆಂಟ್ರಿಂಗ್ ಪ್ಲೇಟ್-ಕಾಮಗಾರಿಗೆ ಬೇಕಾಗುವಷ್ಟು.

3) ಕಾಮಗಾರಿಗೆ ಅವಶ್ಯಕವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.

4) ಮುಂಗಡ ಹಣ ಠೇವಣಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಲೋ.ಇ. ವಿಭಾಗ, ವಿಜಾಪುರ ಇವರ ಹೆಸರಿನಲ್ಲಿ ಹಣ ಪಾವತಿಯಾಗುವಂತೆ ನಿಗದಿತ ಠೇವಣಿ ಮಾಡಿದ ರಶೀದಿಯನ್ನು/ ಡಿಮಾಂಡ್ ಡ್ರಾಫ್ಟ್/ ಬ್ಯಾಂಕ್ ಗ್ಯಾರಂಟಿ ಕೆಲಸದ ಹೆಸರುಗಳನ್ನು ನಮೂದಿಸಿ ಗುತ್ತಿಗೆಯ ಪತ್ರದ ಜೊತೆ ಸಲ್ಲಿಸುವುದು. ಹಾಗೆ ಮಾಡಲು ತಪ್ಪಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

5) ಠೇವಣಿ ಕ್ರಮಬದ್ಧತೆ (ವ್ಯಾಲಿಡಿಟಿ ಅವಧಿ) 90 ದಿನಗಳ ಅವಧಿಯನ್ನು ಒಳಗೊಂಡಿರುತ್ತದೆ.

6) ಯಾವುದೇ ಕಾರಣವನ್ನು ನೀಡದೇ ಅಥವಾ ಎಲ್ಲಾ ಟೆಂಡರುಗಳನ್ನು ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ.

**ಬಿ.ಪಿ. ಕೆಂಗನಾಳ**

ಪಿ.ಆರ್.634

ಕಾರ್ಯನಿರ್ವಾಹಕ ಅಭಿಯಂತರರು,
ಲೋಕೋಪಯೋಗಿ ಇಲಾಖೆ ವಿಭಾಗ, ವಿಜಾಪುರ.

## ಜಿಲ್ಲಾ ಪೊಲೀಸ್ ಕಾರ್ಯಾಲಯ, ಉತ್ತರ ಕನ್ನಡ ಜಿಲ್ಲೆ, ಕಾರವಾರ

## ಟೆಂಡರ್ ಹರಾಜು ಪ್ರಕಟಣೆ

**ಸಂಗ್ರಹ/ಸಂಖ್ಯೆ:123/ 2005-06, ದಿನಾಂಕ:15ನೇ ಅಕ್ಟೋಬರ್, 2005**

**ವಿಷಯ :** ತುಕ್ಕು ಹಿಡಿದು ನಿಷ್ಪ್ರಯೋಜಕವಾಗಿರುವ ಹಳೆಯ ಏರಿಯಲ್ ಕಂಬಗಳನ್ನು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** ಪೊಲೀಸ್ ಅಧೀಕ್ಷಕರು, ವೈರ್‌ಲೆಸ್ ಬೆಂಗಳೂರು, ಇವರ ಪತ್ರ ಸಂಖ್ಯೆ: ಸಾಮಾನ್ಯ/ 7/ ಕಾರವಾರ/ 05-06, ದಿನಾಂ:21.09.2005.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕಾರವಾರ ಜಿಲ್ಲೆಯ ಪೊಲೀಸ್ ಠಾಣೆಯಲ್ಲಿರುವ ತುಕ್ಕು ಹಿಡಿದ ನಿರುಪಯುಕ್ತವಾಗಿರುವ ಹಳೆಯ 60 ಅಡಿ ಲೆಟಿಕ್ ಮತ್ತು ಟ್ಯೂಬುಲರ್ ಟವರ್‌ಗಳನ್ನು ಹರಾಜು ಮಾಡಲು ಪೊಲೀಸ್ ಅಧೀಕ್ಷಕರು, ವೈರ್‌ಲೆಸ್ ಬೆಂಗಳೂರರವರು 13 ಪೊಲೀಸ್ ಠಾಣೆ ಹಾಗೂ 1 ಹಳೆಯ ನಿಸ್ತಂತು ಕೇಂದ್ರಗಳಲ್ಲಿಯ ಟವರ್ ಹರಾಜು ಮಾಡಲು ಅನುಮತಿ ನೀಡಿದ್ದು, ಸದರಿ ಹರಾಜನ್ನು ಹಾಗೂ ಮರುಟೆಂಡರನ್ನು **ದಿನಾಂಕ:18.12.2005ರಂದು 11 ಗಂಟೆಗೆ** ವಿಲೇವಾರಿ ಮಾಡುವ ಬಗ್ಗೆ ಟೆಂಡರ್ ಕರೆದಿದ್ದು, ಆಸಕ್ತಿಯುಳ್ಳವರು ಭಾಗವಹಿಸಲು ತಿಳಿಸಲಾಗಿದೆ. ಸದರಿ ನಿರುಪಯುಕ್ತವಾಗಿರುವ ಟವರ್‌ಗಳ ವಿವರ ಈ ಕೆಳಗಿನಂತೆ ಇರುತ್ತವೆ.

| ಕ್ರ.ಸಂ. | ಠಾಣೆಯ ವಿವರ | ಏರಿಯಲ್ ಟವರ್‌ಗಳ ವಿವರ |
|---|---|---|
| 1. | ಕದ್ರಾ ಠಾಣೆ | 60 ಅಡಿ ಲೆಟಿಕ್ |
| 2. | ಮಲ್ಲಾಪುರ ಠಾಣೆ | 60 ಅಡಿ ಲೆಟಿಕ್ |
| 3. | ಕುಮಟಾ ಠಾಣೆ | 60 ಅಡಿ ಲೆಟಿಕ್ |
| 4. | ಹೊನ್ನಾವರ ಠಾಣೆ | 60 ಅಡಿ ಟ್ಯೂಬುಲರ್ |
| 5. | ಭಟ್ಕಳ ಠಾಣೆ | 60 ಅಡಿ ಟ್ಯೂಬುಲರ್ |
| 6. | ಸಿರ್ಸಿ ರೂರಲ್ ಠಾಣೆ | 60 ಅಡಿ ಟ್ಯೂಬುಲರ್ |
| 7. | ಮುಂಡಗೋಡ ಠಾಣೆ | 60 ಅಡಿ ಲೆಟಿಕ್ |
| 8. | ಹಳಿಯಾಳ ಠಾಣೆ | 60 ಅಡಿ ಲೆಟಿಕ್ |
| 9. | ಡಾಂಡೇಲಿ ಶಹರ ಠಾಣೆ | 60 ಅಡಿ ಟ್ಯೂಬುಲರ್ |
| 10. | ಡಾಂಡೇಲಿ ಗ್ರಾಮೀಣ ಠಾಣೆ | 60 ಅಡಿ ಟ್ಯೂಬುಲರ್ |
| 11. | ಅಂಬಿಕಾನಗರ ಠಾಣೆ | 60 ಅಡಿ ಟ್ಯೂಬುಲರ್ |
| 12. | ಜೋಯಿಡಾ ಠಾಣೆ | 60 ಅಡಿ ಲೆಟಿಕ್ |
| 13. | ಗಣೇಶಗುಡಿ ಹೊರಠಾಣೆ | 60 ಅಡಿ ಟ್ಯೂಬುಲರ್ |
| 14. | ಕಾರವಾರ ಹಳೆಯ ನಿಸ್ತಂತು ಕೇಂದ್ರ | 60 ಅಡಿ ಲೆಟಿಕ್ |

ಸದರಿ ಮೇಲ್ಕಂಡ ನಿರುಪಯುಕ್ತ ವಸ್ತುಗಳನ್ನು ಲಾಟ್ ಲೆಕ್ಕದಲ್ಲಿ ಹರಾಜು ಮಾಡಲಾಗುವುದು.

### ಹರಾಜಿನ ಷರತ್ತು ಮತ್ತು ನಿಬಂಧನೆಗಳು

1) ನಿರುಪಯುಕ್ತವಾಗಿರುವ ಏರಿಯಲ್ ಟವರ್‌ಗಳನ್ನು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ಈಗ ಹೇಗೆ ಇದೆಯೋ ಅದೇ ಸ್ಥಿತಿಯಲ್ಲಿ ಬಹಿರಂಗ ಹರಾಜು ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಪ್ರತಿಯೊಬ್ಬರು ರೂ.1000/- (ರೂಪಾಯಿ ಒಂದು ಸಾವಿರ ಮಾತ್ರ) ಠೇವಣಿ ಹಣದ ಮೊತ್ತವನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಹಣ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಈ ನಿರುಪಯುಕ್ತ ಏರಿಯಲ್ ಟವರ್ ಖರೀದಿಸುವವರು ರೂ.1000-00 (ರೂಪಾಯಿ ಒಂದು ಸಾವಿರ ಮಾತ್ರ) ಠೇವಣಿ ಹಣವನ್ನು ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನಗದು ಶಾಖೆಗಳಲ್ಲಿ ತುಂಬಿ ನಿರುಪಯುಕ್ತವಾಗಿರುವ ಟವರ್‌ಗಳನ್ನು ಖರೀದಿಗಾಗಿ ಎಂದು ಸ್ಪಷ್ಟವಾಗಿ ನಮೂದಿಸಿ ಪಟ್ಟಿ ಮಾಡಲಾದ ಟೆಂಡರ್‌ಗಳನ್ನು ದಿನಾಂಕ: 18.12.2005ರಂದು ಮಧ್ಯಾಹ್ನ ಈ ಕಛೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. (ಟೆಂಡರ್ ಫಾರಂ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ಕೊಡಲಾಗಿದೆ.)

4) ಟೆಂಡರ್ ಬಿಡ್ ಮೊತ್ತವನ್ನು ಅಂಕೆ ಮತ್ತು ಅಕ್ಷರದಲ್ಲಿ ಎರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಬೇಕು. ಏನಾದರೂ ತಿದ್ದುಪಡಿ ಮಾಡಿದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಬೇಕು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿರುವ ಪಿ.ಐ. ನಿಸ್ತಂತು (ವೈರ್‌ಲೆಸ್) ರವರಿಗೆ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮ್ಮುಖದಲ್ಲಿ ಕರೆದು ಬಹಿರಂಗ ಹರಾಜುಪಡಿಸುವರು. ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಯ ಅಥವಾ ಟೆಂಡರು ದಾಖಲಿಸಿದ ಅತೀ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್ ಬಿಡ್‌ದಾರರು ಎಂದು ಪರಿಗಣಿಸಲಾಗುವುದು.
6) ಯಶಸ್ವಿಯಾದ ಟೆಂಡರು ಬಿಡ್‌ದಾರರು ಅಂಗೀಕೃತ ಹೆಚ್ಚಿನ ಬೆಲೆಯ ಶೇಕಡಾ 25ರಷ್ಟು ಠೇವಣಿಯನ್ನು ಬಿಟ್ಟು ಹಣವನ್ನು ಸ್ಥಳದಲ್ಲಿಯೇ ಅದೇ ದಿನ ತುಂಬತಕ್ಕದ್ದು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡಲಾಗುವುದಿಲ್ಲ. ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಸಿ.ಓ.ಡಿ./ ಟಿ.ಟಿ.ಎಂ ಅಥವಾ ಡಿ.ಐ.ಜಿ.ಪಿ. ವೈರ್‌ಲೆಸ್ ಬೆಂಗಳೂರು ಇವರಿಂದ ವಿಲೇವಾರಿ ಒಪ್ಪಿಗೆ ತಂದ ನಂತರ ಉಳಿದ ಭಾಗವನ್ನು ಬಿಡ್‌ದಾರರಿಂದ ಕಟ್ಟಿಸಿಕೊಂಡು ವೈರ್‌ಲೆಸ್ ಟವರುಗಳನ್ನು ವಹಿಸಿಕೊಡಲಾಗುವುದು. ಈ ವೈರ್‌ಲೆಸ್ ಟವರುಗಳನ್ನು ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ವೈರ್‌ಲೆಸ್ ಟವರುಗಳನ್ನು ಹರಾಜು ಮಾಡಲಾಗುವುದು.
7) ಯಶಸ್ವಿ ಬಿಡ್‌ದಾರರು ಎಲ್ಲಾ ಹಣವನ್ನು ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ ಕಾರವಾರ ರವರ ಕಛೇರಿಯ ನಗದು ಶಾಖೆಯಲ್ಲಿ ತುಂಬತಕ್ಕದ್ದು. ನಿರುಪಯುಕ್ತವಾಗಿರುವ ವೈರ್‌ಲೆಸ್ ಟವರುಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಸೂಲಿ ಮಾಡಲಾಗುವುದು.
8) ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರುತ್ತಾರೆ.
9) ಹರಾಜಿನಲ್ಲಿ ಯಾವುದೇ ಸವಾಲುಗಳನ್ನು ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಉ.ಕ., ಕಾರವಾರರವರು ಹೊಂದಿರುತ್ತಾರೆ. ಹಾಗೂ ಅವರ ತೀರ್ಮಾನವೇ ಅಂತಿಮವಾಗಿರುವುದು.
10) ಬಹಿರಂಗ ಹರಾಜಿನ ವಿಷಯದಲ್ಲಿ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಸಿ.ಓ.ಡಿ./ ಟಿ.ಟಿ.ಎಮ್. ಅಥವಾ ಡಿ.ಐ.ಜಿ.ಪಿ. ವೈರ್‌ಲೆಸ್ ಬೆಂಗಳೂರು ಇವರು ಮಾಡುವ ನಿರ್ಣಯ ಅಂತಿಮವಾಗಿರುತ್ತದೆ.
11) ಹರಾಜಿನಲ್ಲಿ ಯಶಸ್ವಿಯಾಗದೇ ಇರುವಂತಹ ಸವಾಲುದಾರರ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಅವರಿಗೆ ಹಿಂತಿರುಗಿಸಲಾಗುವುದು.
12) ಹರಾಜುದಾರರು ಭಾಗವಹಿಸಲು ಇಚ್ಛಿಸುವವರು ನಿರುಪಯುಕ್ತ ಟವರುಗಳನ್ನು ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ವೀಕ್ಷಿಸಬಹುದು.
13) ಭರ್ತಿ ಮಾಡಿದ ಟೆಂಡರು ಫಾರಂಗಳಲ್ಲಿ ಟೆಂಡರುದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸುವುದು.

**ಟೆಂಡರ್ ಫಾರಂನ ನಮೂನೆ**

**ಪೊಲೀಸ್ ವೈರ್‌ಲೆಸ್ ನಿರುಪಯುಕ್ತವಾಗಿರುವ ಟವರ್‌ಗಳು**

ಗೆ,

ಪೊಲೀಸ್ ಅಧೀಕ್ಷಕರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಮಾನ್ಯರೇ,

ತಮ್ಮ ಕಛೇರಿಯ ಟೆಂಡರ್ ಪ್ರಕಟಣೆ 2005-06, ದಿನಾಂಕ: 15.11.2005ರಲ್ಲಿ ತಿಳಿಸಿರುವ....................ನೇ ಸಾಲಿನ ನಿರುಪಯುಕ್ತವಾದ ಟವರುಗಳನ್ನು ರೂ................................ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,
(ಬಿಡ್‌ದಾರರ ಸಹಿ ಮತ್ತು ವಿಳಾಸ)

ದಿನಾಂಕ:
ಸ್ಥಳ:

ಪಿ.ಆರ್.635 ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ, ಕಾರವಾರ.

**WATER RESOURCES DEPARTMENT**

**OFFICE OF THE EXECUTIVE ENGINEER, NO.4 BRLBC DIVISION, BHADRAVATHI**

**TENDER POSTPONEMENT**

**No.EE/BDN-4/PB1/T.N./Kaduhinabylu/ 2005-06, 2694/1, Dated:5th November, 2005**

**Ref:** 1. This office Notification No. 2444/ Dated: 10.10.2005.
2. This office Notification No. 2445/ Dated:10.10.2005.

The tenders invited vide references (1) and (2) above for the works of Bakrihalla- Kaduhinabylu Lift Irrigation Scheme in N.R. Pura Taluk, of Chickagalur District of Karnataka State are hereby postponed. Further schedule of dates for the tender process and modification will be notified later.

**S.H. MANJAPPA**
Executive Engineer,
No.4, BRLBC Division, Bhadravathi.

PR-637

## POLICE DEPARTMENT
## OFFICE OF THE SUPERINTENDENT OF POLICE, BAGALKOT DISTRICT, BAGALKOT
## NOTIFICATION
### Est.1/CL-403/05, Dated: 7th November, 2005

**Shri SHANKAR VENKAPPA DHANAGAR** working as Armed Police Constable B.No.297 in the Police Department of Office of District Armed Reserve, Bagalkot is permitted to change his name to **SHANKAR VENKAPPA PUJARI.**

Signature and Designation of the
Appointing Authority.

PD-118

## OFFICE OF THE EXECUTIVE ENGINEER, MINOR IRRIGATION DIVISION, HASSAN
## TENDER NOTIFICATION
### No. EE/MID/HSN/ PB-2/2003, 2343/ Dated: 3rd November, 2005
### For Item Rate Tender

Sealed tenders in the prescribed form in duplicate in two cover system are invited by the undersigned on behalf of the Governer of Karnataka from the registered contractors on the dates noted against the work. The tneders will be opened by the undersigned at his office at 4.30pm on the same day if possible. Further particulars if any required by the contractor can be had from the office of the undersigned during office hours on all working days.

| Sl. No. | Name of work | Amount put to tender Rs. In Lakhs | E.M.D. Rs. | Cost of tender documents (Not refundable) Rs. | Class of Contractor | Stipulated Period for completio n | Receipt of application upto 5.30 pm | Last date for Issue of Tender documents upto 5.30 pm | Receipt of tender documents upto 4.00 pm |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1. | Rejuvination of crest gates of Chakenahally reservoir in Holenarasipura taluk, Hassan District. | 69=54 | 69540=00 | 7000+ Tax | class I/ Firm | 6 Months including Monsoon Period | 22.12.2005 | 29.12.2005 | 02.01.2006 |

Executive Engineer,
M.I.Division, Hassan.

**CONDITIONS:**

1) Contractor should produce original registration certificate and a copy of the same should be enclosed along with their application at the time applying for the tender documents.
2) E.M.D. should be paid in the name of Executive Engineer, Minor Irrigation Division, Hassan in the form of DD/ FDR/ TDR/ pledged NSC. Failing which such tenders will be rejected.
3) (a) Only contractors who have excecuted similar type of work is in manufacturing, supplying and errection of crest gates and repairs to crest gate of dams in any five years of 2001-02 to 2005-06 period costing not less than of the amount to which the tender is called for are eligible to apply.
(b) Preference will be given to the contractor who have excecuted the repair works of crest gates.
4) Contractors should enclose the copies of K.S.T. registration certificate and incom tax clearence certificate along with their application.
5) The blank tender forms will be issued on the above mentioned date on production of original registration pass book only. Blank tender forms will not be sent by post.
6) The tender box will be kept at the office of the undersigned only.
7) The agencies have to submit the tenders in two cover system.

**(A) The first cover is technical bid:**

i) General information
ii) Structure and organisation.
iii) General experience record.
iv) Details of contract of similar nature and complexity.
v) Particular experience record.
vi) Current contract commitment.
vii) Financial capacity.
viii) E.M.D. in the form of D.D./ F.D./T.D.R. pludged NSC should be enclosed in technical bid cover only.

**(B) The second cover is financial bid:**
The financial bid of the agency will be opened subject to the condition that the agency fulfill the pre-qualification in the technical bid.

8) Line of credit obtained from any nationalized bank for 50% of the tendered amount shall be furnished with the technical bid.
9) The rights are reserved with the Executive Engineer to accept or reject the tender without giving any reasons.

Executive Engineer,
PR-638 M.I.Division, Hassan.

**OFFICE OF THE EXECUTIVE ENGINEER, NATIONAL HIGHWAY DIVISION, KARWAR**
**TENDER NOTIFICATION**
**No.EE/NHD/KWR/AE/NIT/2005-06/1128, Dated:3rd November, 2005**

Sealed Tenders in (Duplicate) are invited from the Class-I Contractors Registered in P.W.D. by the under signed on behalf of the Governor of Karnataka for the work mentioned below. The completed Tenders will be received in the Office of the Superintending Engineer, National Highway Circle, Dharwad or the Executive Engineer, National Highway Division, Kajubag, Karwar at his office upto 4-00 PM on 14.12.2005. The tenders will be opened by the Executive Engineer at 4-30 PM on 14.12.2005 or any other convenient date.

Particulars if any required by the Contractors can be had from the Office of the Executive Engineer, National Highway Division, Karwar, during the office hours on all working days. It may be noted that if any of the date mentioned in this notice happens to be a General Holiday, the next working day will holds good in lieu of the dates mentioned.

| Sl. No. | Name of work | Amount put to tender (in Rs.) | E.M.D. to be paid (in Rs.) | Cost of tender documents (Not refundable) (in Rs.) | Class of Registration | Time Limit | Last date of receipt of application for purchase of Blank tender Forms | Receipt of Sealed Tenders |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | Providing Paved Shoulders & Footpath from Km. 139.60 to 141.00 of NH-17, Panaji-Mangalore Section. | 4260523/- | 42700/- (in favour of E.E., N.H.Dn, Karwar, in the form of BG/ Call Deposit) | 4000/- +12.5% VAT | Class-II | 5 Months | 13.12.05 upto 5.30 PM | 14.12.05 up to 4.00 PM |

**CONDITIONS:**

1) Each Tenderer should have satisfactorily completed similar works mentioned above for a value not less than 30% of the amount put to Tender in any one of the financial year during a block period of previous Three financial years. Certificates in this regard are to be furnished from the competent authority not below the rank of Executive Engineer or District Level Officer.
2) Applicant should own the machineries such as Hot Mix Plant 40/60 TPH, Road Roller, Concrete Mixer, Vibrators, Tippers, etc.,
3) The concerned Officer reserves the right to accept or reject any Tender or all Tender without assigning any reason whatsoever.

Executive Engineer,
PR-639 National Highway Division,
Karwar.